ಹೊಸ ಪ್ರೊಗ್ರಾಂಗಳನ್ನು ಸಾಫ್ಟ್‌ವೇರ್ ಮೂಲಕ ರೂಪಿಸುವ ನೈಪುಣ್ಯತೆ ಉಳ್ಳವರಾಗಿರಬೇಕು. ಈ ಸಂಬಂಧದ ದಾಖಲಾತಿಗಳಲ್ಲಿ ಟೆಂಡರ್ ದಾಸ್ತಾವೇಜಿನೊಂದಿಗೆ ಲಗತ್ತಿಸಿರಬೇಕು.

2 ಸಂಗೀತ ಕಾರಂಜಿ ಚಾಲನೆ ಜೊತೆಗೆ ವಿದ್ಯುತ್‌ಚ್ಛಕ್ತಿ ಸಿಸ್ಟಮ್‌ಗಳ ನಿಯಂತ್ರಣ ಮತ್ತು ಪಾಲನೆ ಮಾಡಬೇಕಾಗಿರುವುದರಿಂದ 100 ಕೆ.ವಿ. ಸಾಮರ್ಥ್ಯ (ಲೋಡ್) ವಿದ್ಯುತ್ ಸಿಸ್ಟಮ್ ನಿರ್ವಹಿಸಿದ ಅನುಭವ ಉಳ್ಳವರಾಗಿರಬೇಕು. ಸಂಗೀತ ಕಾರಂಜಿಗೆ ಬೇಕಾದಂತಹ ವಿದ್ಯುತ್‌ಚ್ಛಕ್ತಿ ಸರ್ಕ್ಯೂಟ್ ನಿರ್ವಹಣೆ/ ದುರಸ್ಥಿ ಕೈಗೊಳ್ಳಬೇಕು. ಹಾಗೂ ಯು.ಜಿ. ಕೇಬಲಿಂಗ್ ಕಾರಂಜಿ ಪ್ಯಾನಲ್ ಬೋರ್ಡ್, ವಿದ್ಯುಚ್ಛಕ್ತಿ ಸರ್ಕ್ಯೂಟ್‌ಗಳನ್ನು ಸ್ವತಹಃ ನಿರ್ವಹಿಸುವ ಸಾಮರ್ಥ್ಯವಿರಬೇಕು. ಟೆಂಡರ್‌ದಾರರು ಆಧಿಕೃತ ವಿದ್ಯುಚ್ಛಕ್ತಿ ನಿರ್ವಹಣೆ ಗುತ್ತಿಗೆ ಲೈಸನ್ಸ್‌ನ್ನು ಕರ್ನಾಟಕ ವಿದ್ಯುತ್‌ಚ್ಛಕ್ತಿ ಇಲಾಖೆಯಿಂದ ಪಡೆದವರಾಗಿರಬೇಕು. ಹಾಗೂ ದಾಖಲಾತಿ ಲಗತ್ತಿಸಿರಬೇಕು.

3 ಇಂದಿರಾಗಾಂಧಿ ಸಂಗೀತ ಕಾರಂಜಿಯನ್ನು ಅಹುಜಾ ಪಬ್ಲಿಕ್ ಸಿಸ್ಟಮ್ (ಆಡಿಯೋ ರ್‍ಯಾಕ್) ಶ್ರವಣ ಸಾಧನಕ್ಕೆ ಒಳಪಟ್ಟು ಸ್ಥಾಪಿಸಲಾಗಿದ್ದು ಇದರ ಸಂಪೂರ್ಣ ನಿರ್ವಹಣೆ ಟೆಂಡರ್‌ದಾರರೇ ಆಗಿರುತ್ತಾರೆ. ಅನುಭವದ ದೃಢೀಕರಣ ಲಗತ್ತಿಸಿರಬೇಕು.

4 ಸಂಗೀತ ಕಾರಂಜಿಯಲ್ಲಿ ಕಾರಂಜಿ ಪ್ರದರ್ಶನದ ನಿರ್ವಹಣೆ ಬದಲಾವಣೆ ನಿಯಂತ್ರಣ ಟೆಂಡರ್‌ದಾರರದೇ ಆಗಿದ್ದು ಟೆಂಡರ್‌ದಾರರು ಹೊಸ ಹೊಸ ಸಂಗೀತ ಜನಪ್ರಿಯ ದೇಶಭಕ್ತಿ ಗೀತೆ, ನಾಡಗೀತೆ, ಸಿನಿಮಾ ಸಂಗೀತ ವಾದ್ಯ ಸಂಗೀತಗಳ ಪ್ರೊಗ್ರಾಮ್‌ಗಳ ಸಿಡಿಯನ್ನು ಹೊಂದಿದವರಾಗಿರಬೇಕು. ಹಾಗೂ ಅದನ್ನು ಪ್ರತ್ಯೇಕ್ಷತೆ ಮೂಲಕ ಇಂದಿರಾಗಾಂಧಿ ಸಂಗೀತ ಕಾರಂಜಿಯಲ್ಲಿ ಸಕ್ಷಮ ಪ್ರಾಧಿಕಾರಕ್ಕೆ ಕಾರಂಜಿಯಲ್ಲಿ ಪ್ರತ್ಯೇಕ್ಷತೆ ನೀಡಬೇಕು.

5 ಸಂಗೀತ ಕಾರಂಜಿ ನಿರ್ವಹಣೆಗೆ ಬೇಕಾದ 100 ಕೆವಿ ಡೀಸೆಲ್ ಜನರೇಟರ್ ಸೆಟ್ ಹಾಗೂ ಕಂಟ್ರೋಲ್ ರೂಂಗಳ ಸಂಪೂರ್ಣ ಪಾಲನೆ, ದುರಸ್ಥಿ ಹಾಗೂ ನಿರ್ವಹಣೆಯನ್ನು ಗುತ್ತಿಗೆ ಅವಧಿಯಲ್ಲಿ ಟೆಂಡರ್‌ದಾರರೇ ನಿರ್ವಹಿಸಲು ಬದ್ದರಾಗಿರಬೇಕು. ಕಾರಂಜಿ ಉದ್ಯಾನವನದಲ್ಲಿರುವ ಎಲ್ಲಾ ಎಲೆಕ್ಟ್ರಿಕಲ್ ಯಾರ್ಡ್ ಲೈಟ್‌ಗಳ ನಿರ್ವಹಣೆ ಈ ಅವಧಿಗೆ ಮಾಡಬೇಕು. ಗುತ್ತಿಗೆ ಅವಧಿಯಲ್ಲಿ ಕಾರಂಜಿಯ ಸಣ್ಣ ಪುಟ್ಟ ದುರಸ್ತಿ/ ವಾರ್ಷಿಕ ದುರಸ್ತಿಯನ್ನು ಟೆಂಡರ್‌ದಾರರೇ ನಿರ್ವಹಿಸಲು ಬದ್ದರಾಗಿರಬೇಕು.

6 ಕಾರಂಜಿಯ ವಿದ್ಯುತ್ ಪ್ಯಾನಲ್ ರೀಲೆ ಕಂಟ್ರೋಲ್, ಪ್ಯಾನಲ್ ಗಣಕ ಯಂತ್ರ ಹಾಗೂ ಸಂಬಂಧಿಸಿದ ಇತರೆ ಬಿಡಿ ಭಾಗಗಳನ್ನು ಸುಸ್ಥಿಯಲ್ಲಿಟ್ಟಿರಬೇಕು. ಯಾವುದೇ ಕಾರಣಕ್ಕೆ ಸಂಗೀತ ಕಾರಂಜಿಯ ಪ್ರದರ್ಶನಕ್ಕೆ ಅಡ್ಡಿಯಾಗದಂತೆ ಇವುಗಳನ್ನು ನಿರ್ವಹಿಸಲು ಬದ್ದರಾಗಿರಬೇಕು.

7 ಕಾರಂಜಿಯ ಚಾಲನೆ ಮತ್ತು ನಿರ್ವಹಣೆಗಾಗಿ ಬಳಸುವ ವಿದ್ಯುತ್‌ಚ್ಛಕ್ತಿ ಮೀಟರ್ ಆರ್.ಆರ್. 2845 ರ ಮಾಸಿಕ ವಿದ್ಯುಚ್ಛಕ್ತಿ ಬಿಲ್ಲಿನ ಮೊತ್ತವನ್ನು ಟೆಂಡರ್‌ದಾರರೇ ಭರಿಸಲು ಬದ್ದರಾಗಿರಬೇಕು.

8 ಪ್ರತಿ ದಿನ ಕಾರಂಜಿ ಚಾಲನೆಗೆ ಬೇಕಾಗುವಷ್ಟು ಪ್ರಮಾಣದ ನೀರನ್ನು (ಡೀಸೆಲ್ ಇಂಜನ್ ಇಂಧನವನ್ನು ಟೆಂಡರ್‌ದಾರರೇ ಹೊರಗಿನಿಂದ ಖರೀದಿಸಿ ಕಾರಂಜಿಗೆ ಬಳಸಲು ಬದ್ದರಾಗಿರಬೇಕು. ಉದ್ಯಾನವನದ ನೀರನ್ನು ಈ ಉದ್ದೇಶಕ್ಕೆ ಬಳಸುವಂತಿಲ್ಲ ಅನಧಿಕೃತವಾಗಿ ಕಾರಂಜಿ ಉದ್ಯಾನದ ನೀರನ್ನು/ವಿದ್ಯುಚ್ಛಕ್ತಿಯನ್ನು ಬಳಕೆ ಮಾಡುವುದು ಗುತ್ತಿಗೆ ರದ್ದತಿಗೆ ಕಾರಣವಾಗುತ್ತದೆ. ಕಾರಂಜಿಯ ಸ್ವಚ್ಛತೆಯನ್ನು ಪ್ರತಿವಾರ ಕೈಗೊಳ್ಳಬೇಕಾಗುತ್ತದೆ. ಹಾಗೂ ವಾರಕ್ಕೊಮ್ಮೆ ಹೊಸ ನೀರನ್ನು ಬಳಸಿ ಕಾರಂಜಿ ಚಾಲನೆ ಮಾಡಲು ಬದ್ದರಾಗಿರಬೇಕು.

**ಆರ್ಥಿಕ ಬಿಡ್ಡಿನ ವಿವರ:–**

1 ಟೆಂಡರ್ ಫಾರಂ ಅನ್ನು ದಿನಾಂಕ:13-06-2008 ರಿಂದ 17-06-2008 ರವರೆಗೆ ಕಛೇರಿ ವೇಳೆಯಲ್ಲಿ ಪಡೆಯಬಹುದು ಮೊಹರಾದ ಟೆಂಡರ್‌ಗಳನ್ನು ದಿನಾಂಕ: 18-06-2008 ರಂದು ಮದ್ಯಾಹ್ನ 3.00 ಗಂಟೆಯವರೆಗೆ ಈ ಕಛೇರಿಯಲ್ಲಿ ಸ್ವೀಕರಿಸಲಾಗುತ್ತದೆ. ನಂತರ ಬಂದ ಟೆಂಡರ್ ಪರಿಗಣಿಸುವುದಿಲ್ಲ ದಿನಾಂಕ:18.06.2008 ರಂದು ಸಂಜೆ 4.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್ ತೆರೆಯಲಾಗುವುದು.

2 ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸುವಾಗ ಅದನ್ನು ಸೀಲ್ ಮಾಡಿದ ಲಕೋಟೆಯಲ್ಲಿಟ್ಟು ಲಕೋಟೆ ಮೇಲೆ " ಇಂದಿರಾಗಾಂಧಿ ಸಂಗೀತ ಕಾರಂಜಿ ವಾರ್ಷಿಕ ಚಾಲನೆ ಮತ್ತು ನಿರ್ವಹಣೆ ಬಗ್ಗೆ ಟೆಂಡರ್ " ಎಂದು ಬರೆದಿರಬೇಕು. ಹಾಗೂ ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್‌ಉದ್ಯಾನವನ ಬೆಂಗಳೂರು–1 ಇವರಿಗೆ ತಲುಪುವಂತೆ ವಿಳಾಸ ಬರೆದಿರಬೇಕು.

3 ಟೆಂಡರ್ ಜೊತೆಯಲ್ಲಿ ಮುಂಗಡ ಠೇವಣಿ ಹಣ (ಭದ್ರತಾ ಠೇವಣಿ) ರೂ.35,000=00 (ರೂ. ಮೂವತ್ತೈದು ಸಾವಿರ) ಗಳಿಗೆ ಡಿ.ಡಿ. ಲಗತ್ತಿಸಿರಬೇಕು.

4 ಮುಂಗಡ ಠೇವಣಿ ಹಣದ ಡಿ.ಡಿ.ಯನ್ನು ಸದಸ್ಯ ಕಾರ್ಯದರ್ಶಿಗಳು, "ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನ" ಲಾಲ್‌ಬಾಗ್, ಬೆಂಗಳೂರು-4 ಇವರಿಗೆ ಪಾವತಿಯಾಗುವಂತೆ ಬೆಂಗಳೂರಿನ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡಿದಿರಬೇಕು. ಟೆಂಡರ್ ಜೊತೆಯಲ್ಲಿ ರೂ. 35000/– ಗಳಿಗೆ ಡಿ.ಡಿ. ಲಗತ್ತಿಸಿಲ್ಲದೆ ಇರುವಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುತ್ತದೆ.

5 ಟೆಂಡರ್‌ದಾರರು ಕನಿಷ್ಟ 2 ವರ್ಷಗಳ ಸತತ ಅವಧಿಗೆ ಗಣೀಕೃತ ಕಾರಂಜಿಯನ್ನು ಚಾಲನೆ ಮತ್ತು ನಿರ್ವಹಣೆ ಮಾಡಿದ ಅನುಭವದ ಬಗ್ಗೆ ದೃಢೀಕರಣ ಲಗತ್ತಿಸಿರಬೇಕು.

6 ಟೆಂಡರ್‌ದಾರರು ಅವರ ಹಿಂದಿನ 3 ವರ್ಷಗಳ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ನಲ್ಲಿ ಆದಾಯ ತೆರಿಗೆ ಇಲಾಖೆಯಿಂದ ಪಡೆದು ಲಗತ್ತಿಸಬೇಕು.

7 ಟೆಂಡರ್‌ದಾರರು ರೂ.5.00 ಲಕ್ಷ (ಐದು ಲಕ್ಷ) ಗಳ ಬ್ಯಾಂಕ್ ಸಾಲ್ವೆನ್ಸಿ ಸರ್ಟಿಫಿಕೆಟ್ ಲಗತ್ತಿಸಿರಬೇಕು.

8 ಟೆಂಡರ್‌ದಾರರು ಟೆಂಡರ್ ನೀಡುವಾಗ ಯಾವುದೇ ಪೂರ್ವ ಷರತ್ತು ನಿಭಂದನೆ ವಿಧಿಸುವಂತಿಲ್ಲ ಟೆಂಡರ್ ಫಾರಂನಲ್ಲಿ ತಿಳಿಸಿದ ವಿವರಗಳಿಗೆ ಮಾಹಿತಿ ಒದಗಿಸಬೇಕು.

9 ಅರ್ಹತೆ ಇಲ್ಲದ ಸಂಸ್ಥೆಗಳಿಗೆ ಟೆಂಡರ್‌ನಲ್ಲಿ ಭಾಗವಹಿಸುವ ಅವಕಾಶವಿಲ್ಲ.

10 ಯಶಸ್ವಿ ಟೆಂಡರ್‌ದಾರರು ನೀಡಿದ ಟೆಂಡರ್ ಅಂತಿಮವಾಗಿ ತೋಟಗಾರಿಕೆ ನಿರ್ದೇಶಕರಿಂದ ಅನುಮೋದಿಸಲ್ಪಟ್ಟ ನಂತರ ಇಂದಿರಾಗಾಂಧಿ ಸಂಗೀತ ಕಾರಂಜಿ ಚಾಲನೆ ಮತ್ತು ನಿರ್ವಹಣೆಯನ್ನು ಗುತ್ತಿಗೆ ಅವಧಿಗೆ ಟೆಂಡರ್ ಷರತ್ತು ಮತ್ತು ನಿಭಂದನೆಗೊಳ್ಳಪಟ್ಟಂತೆ ತೃಪ್ತಿಕರವಾಗಿ ನೆಡೆಸಿಕೊಡಲಾಗುತ್ತದೆ. ಎಂಬ ಬಗ್ಗೆ ರೂ. 200/– (ಇನ್ನೂರು) ಛಾಪಾ ಕಾಗದದಲ್ಲಿ ಗುತ್ತಿಗೆ ಕರಾರನ್ನು ಇಲಾಖೆಗೆ ಬರೆದುಕೊಟ್ಟು ವರ್ಕ್ ಆರ್ಡ್‌ರ್ ಪಡೆದುಕೊಳ್ಳಬೇಕು.

11 ಇಂದಿರಾಗಾಂಧಿ ಸಂಗೀತ ಕಾರಂಜಿಯನ್ನು (ಪ್ರತಿ ದಿನ ಸಂಜೆ 7.00 ರಿಂದ 7.30 ಗಂಟೆವರೆಗೆ ಹಾಗೂ ರಾತ್ರಿ 8.00 ರಿಂದ 8.30 ಗಂಟೆವರೆಗೆ ದಿನಕ್ಕೆ 2 ಪ್ರದರ್ಶನಗಳಿಗೂ ಚಾಲನೆ ಮಾಡಬೇಕು. ಗಣ್ಯ (ಅತಿ ಗಣ್ಯ ವ್ಯಕ್ತಿಗಳು ಕಾರಂಜಿಗೆ ಭೇಟಿ ನೀಡುವ ಸಂದರ್ಭದಲ್ಲಿ ತೋಟಗಾರಿಕಾ ನಿರ್ದೇಶಕರು/ ಉಪ ನಿರ್ದೇಶಕರು ಕಬ್ಬನ್ ಉದ್ಯಾನ ಇವರು ಅನುಮೋದಿಸುವ ಕಾಲಾವಧಿಗೆ ಹೆಚ್ಚುವರಿ ಪ್ರದರ್ಶನಕ್ಕಾಗಿ ಕಾರಂಜಿ ಚಾಲನೆ ಮಾಡಲು ಬದ್ದರಾಗಿರಬೇಕು.

12 ಯಶಸ್ವಿ ಟೆಂಡರ್‌ದಾರರು ಕಾರಂಜಿ ಪ್ರದರ್ಶನದ ವೇಳೆ ಕಂಡು ಬರುವ ತಾಂತ್ರಿಕ ದೋಷ ಇತ್ಯಾದಿ ಸರಿಪಡಿಸಲು ವಿಫಲರಾಗಿ ಪ್ರದರ್ಶನ ನಿಂತು ಹೋದರೆ ಅಂತಹ ಪ್ರದರ್ಶನಗಳಿಂದ ಕಾರಂಜಿಗೆ ಬರಬಹುದಾಗಿದ್ದ ಆದಾಯದ ಹಣವನ್ನು ಟೆಂಡರ್‌ದಾರರೇ ಭರಿಸಬೇಕಾಗುತ್ತದೆ. ಟೆಂಡರ್‌ದಾರರು ಕಾರಂಜಿ ನಿರ್ವಹಣೆಯಲ್ಲಿ ಸಂಪೂರ್ಣ ವಿಫಲರಾದರೆ, ಕಾರಂಜಿಗೆ ನಷ್ಠ, ಹಾನಿಯುಂಟು ಮಾಡಿದರೆ ಬೇಕಾ ಬಿಟ್ಟಿ ನಿರ್ವಹಿಸಿದರೆ, ಅವರ ಭದ್ರತಾ ಹಣವನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಂಡು ಗುತ್ತಿಗೆ ಕರಾರನ್ನು ರದ್ದುಗೊಳಿಸಲು ಕ್ರಮಕೈಗೊಳ್ಳಲಾಗುತ್ತದೆ. ಹಾಗೂ ನಷ್ಟ, ಹಾನಿ, ಬಗ್ಗೆ ಕಾನೂನಿನ ಕ್ರಮ ಜರುಗಿಸಲಾಗುತ್ತದೆ.

13 ಯಶಸ್ವಿ ಟೆಂಡರ್‌ದಾರರು ಪ್ರತಿ ತಿಂಗಳು ಕಾರಂಜಿಯನ್ನು ತೃಪ್ತಿಕರವಾಗಿ ಚಾಲನೆ ಮತ್ತು ನಿರ್ವಹಣೆ ಮಾಡಿದ ಬಗ್ಗೆ ಸಂಬಂಧಿಸಿದ ಕಾರಂಜಿ ಮೇಲ್ವಿಚಾರಕ ಅಧಿಕಾರಿಯಿಂದ ದೃಢೀಕರಣವನ್ನು ಗುತ್ತಿಗೆ ಹಣದ ಬಿಲ್ಲಿಗೆ ಪಡೆದು ಹಣ ಪಾವತಿಗಾಗಿ ಬಿಲ್ಲನ್ನು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ ಇವರ ಕಛೇರಿಗೆ ಸಲ್ಲಿಸಬೇಕು. ನಿರ್ವಹಣಾ ವೆಚ್ಚದ ಬಿಲ್ಲಿನಿಂದ ನಿಯಮಾನುಸಾರ ಅನ್ವಯವಾಗುವ ತೆರಿಗೆಗಳನ್ನು ಕಟಾಯಿಸಲಾಗುತ್ತದೆ.

14 ಗುತ್ತಿಗೆ ಅವಧಿಯಲ್ಲಿ ಕಾರಂಜಿ ನಿರ್ವಹಣೆ ಕಂಡು ಬರುವ ಯಾವುದೇ ಸಂದಿಗ್ದತೆ ಭಿನ್ನಾಭಿಪ್ರಾಯಗಳ ಬಗ್ಗೆ ತೋಟಗಾರಿಕಾ ನಿರ್ದೇಶಕರು, ನೀಡುವ ನಿರ್ಣಯವೇ ಅಂತಿಮವಾಗಿರುತ್ತದೆ.

15 ಟೆಂಡರ್ ನೀಡುವಾಗ ಭಾಗ–1ರಲ್ಲಿ ತಾಂತ್ರಿಕ ಬಿಡ್ಡಿನ ವಿವರಕ್ಕೆ ಮತ್ತು ಭಾಗ–2 ರಲ್ಲಿ ಆರ್ಥಿಕ ಬಿಡ್ಡಿನ ವಿವರಕ್ಕೆ ದಾಖಲಾತಿ ಪ್ರತ್ಯೇಕ ಸಲ್ಲಿಸಬೇಕು. ಮೊದಲನೆದಾಗಿ ತಾಂತ್ರಿಕ ಬಿಡ್ಡ್‌ನ್ನು ತೆರೆಯಲಾಗುವುದು, ತಾಂತ್ರಿಕ ಬಿಡ್ಡಿನಲ್ಲಿ ಟೆಂಡರ್ ಪ್ರಕಾರ ದಾಖಲೆಗಳನ್ನು ನೀಡದಿದ್ದಲ್ಲಿ ಮತ್ತು ಪ್ರಾತ್ಯೇಕ್ಷತೆ ಮೂಲಕ ಸಕ್ಷಮ ಪ್ರಾಧಿಕಾರಕ್ಕೆ ಕಾರಂಜಿ ಪ್ರದರ್ಶನ ನೀಡಲು ಅಸಮರ್ಥರಾದಲ್ಲಿ ಅಂತಹ ಟೆಂಡರ್‌ನ್ನು ತಿರಸ್ಕರಿಸಲಾಗುವುದು. ಅರ್ಹತೆ ಇರುವ ಟೆಂಡರ್‌ಗಳನ್ನು ಮಾತ್ರ ಅಂಗೀಕರಿಸಲಾಗುವುದು ನಂತರ ಎರಡನೇದಾಗಿ ಆರ್ಥಿಕ ಬಿಡ್ಡನ್ನು ತೆರೆಯಲಾಗುವುದು

16 ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಮತ್ತು ಸ್ವೀಕರಿಸುವ ಪೂರ್ಣ ಅಧಿಕಾರವನ್ನು ತೋಟಗಾರಿಕಾ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ಇವರು ಹೊಂದಿರುತ್ತಾರೆ.

ಟೆಂಡರ್ ಬಗ್ಗೆ ಈ ಕಛೇರಿಯನ್ನು ಸಂಪರ್ಕಿಸಿ ಮಾಹಿತಿ ಪಡೆಯಬಹುದು. ಪೋನ್ ನಂ.**22864125**

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು-1.

ಪಿ.ಆರ್. 288

**KARNATAKA STATE BOARD OF WAKFS**
**[constituted by the Government of Karnataka under the Wakf Act, 1995**
**(CENTRAL ACT - 43 OF 95)]**
**Darul Awkaf, No. 6, Cunningham Road, Bangalore-560 052**

**CORRIGENDUM**

**No.KTW/Reg/10/DKD/06-07, Dated; 14th May 2007**

**Sub:** Correction of entries in Gazette Sl.No. 62 Page No. 746 vide Notification No. MWB 20 (2) 1966 dated 8.8.1966 published in official Gazette on 4.4.1968 of Dakshina Kannada District in respect of Dargah Shariff, Jaradagudde, Ammembala, Boliyar Village and Post, Mangalore Taluk, Dakshina Kannada District.

**Ref:**
1. Letter No. DWAC/DK/Reg/6/2005-06 dated 20.9.2006 of the Wakf Officer, District Wakf Advisory Committee, Dakshina Kannada.
2. This officer Public Notice of even No. dated 21.2.2007.
3. This office Revised public Notice of even No. dated 17.4.2007.

The Dargah, Boliyar Village, Mangalore Taluk, Dakshina Kannada District is Gazette Notified Wakf Institution, notified at Sl.No. 62 Page No. 746 vide Notification No. MWB 20 (2) 1966 dated 8.8.1966. The Wakf Officer, DWAC., Dakshina Kannada, vide his letter referred at reference above, has reported that, the Sy.No. Measurements and Boundaries of said Dargah has not been mentioned in the said official Gazette and requested to incorporating the above particulars and issue corrigendum in this behalf.

A Public Notice referred at reference (2) was issued. But due to the discrepancies observed therein with regard to listing the above Public Notice is with drawn. After correction of discrepancies a fresh Public Notice of even No. dated 17.4.2007 was issued by this office calling objections/suggestions if any for the said proposal within 15 days after publication of this office Public Notice. Whereas the Wakf Officer, District Wakf Advisory Committee, Dakshina Kannada vide their report No. DWAC/DK/6/07-08 dated 8.5.07 has reported that there were no objections or suggestions received in this behalf and requested this office to issue necessary corrigendum in this behalf. Hence, this corrigendum.

| Existing entries | | | Read the correct entries | | | |
|---|---|---|---|---|---|---|
| Sl.No. of Gazette Notification | Name of Wakf Sunni or Shia specified Location | Description of Wakf Properties & Particulars etc. | Sl. No. of Kitbul Awkaf | Name of Wakf or Shia Sunni specified location | | Description of Wakf Properties & Particulars etc. |
| 62 | Boliyar Dargah, P.O. Boliar Sunni, Mangalore Taluk | -Nil- | 874 | 1) | Dargah, Sharief Jaradagudde, Ammembala, Boliyar Village & Post, Mangalore Taluk, Dakshina Kannada District. | Property Sy.No.64-8 Boliyar Village, Mangalore Taluk. Extent: 0-11 Acres. Boundaries: East: Remaining Portion of same Sy.No. West: -do- North: -do- South: -do- |
| | | | | 2) | Khabrasthan | Sy.No.64/4 Boliyar Village., Measuring: 0-10 Cents. Bounded by: East: Remaining portion of same Sy.No. West:Remaining portion of same Sy.No. North:Remaining portion of same Sy.No. South:Remaining portion of same Sy.No. |

This corrigendum is issued as per the powers delegated in order No. KBW/110/ADM/05-06 dated 2.3.06 of Karnataka State Board of Wakfs, Bangalore.

Addl. Chief Executive Officer,
Karnataka State Board of Wakfs.

P.D. 40

## ಅರಣ್ಯ ಇಲಾಖೆ

## ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ನೆಡುತೋಪು ನಿರ್ಮಾಣ ಮತ್ತು ಸಸಿ ಬೆಳೆಸುವುದು ಹಾಗೂ ಮಾನ್‌ಸೂನ್ ಕಾಮಗಾರಿ ಕೈಗೊಳ್ಳುವುದರ ಬಗ್ಗೆ ಟೆಂಡರ್

## ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಎ2.ಬಿಯುಡಿ–ಉಅಸಂ, ಅಕಾಟೆ–ಸಿಆರ್.17/ 2008–09. ದಿನಾಂಕ: 17ನೇ ಮೇ 2008**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ 2008–09 ನೇ ಸಾಲಿಗೆ 2008 ರ ಮಳೆಗಾಲದಲ್ಲಿ ವಿವಿಧ ಯೋಜನೆಗಳಡಿಯಲ್ಲಿ ಈ ಕೆಳಗೆ ನಮೂದಿಸಿರುವ ಕಾಮಗಾರಿ ಕೈಗೊಳ್ಳಲು ನೋಂದಾಯಿತ ಅರಣ್ಯ ಗುತ್ತಿಗೆದಾರರಿಂದ ಟೆಂಡರ್ ಕರೆಯಲಾಗಿದೆ.

ದಿನಾಂಕ 19-06-2008 ಅಪರಾಹ್ನ 3.00 ಗಂಟೆಯೊಳಗೆ ಮೊಹರು ಮಾಡಿದ ಟೆಂಡರ್ ಸಲ್ಲಿಸುವುದು ಆದೇ ದಿನ ಕೆಳಗೆ ಸಹಿ ಮಾಡಿದವರ ಅಥವಾ ಇವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟವರು ಸದರಿ ದಿನಾಂಕದಂದು ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್ ಲಕೋಟೆಯನ್ನು ಅಪರಾಹ್ನ 4.00 ಗಂಟೆಗೆ ತೆಗೆಯಲಾಗುವುದು ಮತ್ತು ಸದರಿ ದಿನಾಂಕದಂದು ಯಾವುದೇ ಟೆಂಡರ್ ಬಾರದಿದ್ದರೆ ಅಥವಾ ಕಾರಣಾಂತರಗಳಿಂದ ಟೆಂಡರ್ ನಡೆಯದೆ ಇದ್ದಲ್ಲಿ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ದಿನಾಂಕ 26-06-2008 ರಂದು ಅಪರಾಹ್ನ 3.00 ಗಂಟೆಗೆ ಎರಡನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿದ ಟೆಂಡರ್‌ಗಳನ್ನು ಸ್ವೀಕೃತಿ ಮಾಡಲಾಗುವುದು ಮತ್ತು ಟೆಂಡರ್ ಲಕೋಟೆಯನ್ನು ಅದೇ ದಿನ 4.00 ಗಂಟೆಗೆ ತೆರೆಯಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕ ಪ್ರಕಟಣೆ ಹೊರಡಿಸಲಾಗುವುದಿಲ್ಲ.

**1.ಕರ್ನಾಟಕ ಸ್ವಸ್ಥಿರ ಅರಣ್ಯ ನಿರ್ವಹಣೆ ಮತ್ತು ಜೀವಿ ವೈವಿಧ್ಯ ಸಂರಕ್ಷಣೆ ಯೋಜನೆ (2008–09 ನೇ ಸಾಲಿಗೆ) ಯಡಿಯಲ್ಲಿ ಕೈಗೊಳ್ಳಬೇಕಾದ ಕಾಮಗಾರಿಗಳ ವಿವರ.**

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಯೋಜನೆ ಮತ್ತು ಮಾದರಿ | ಭೌತಿಕ (ಹೆ.ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರೈಸಬೇಕಾದ ದಿನಾಂಕ |
|---|---|---|---|---|---|---|---|---|
| 1 | ರಾಮನಗರ | ಹಂದಿಗುಂದಿ ಎಸ್.ಎಫ್. | ನೆಡುತೋಪು ನಿರ್ಮಾಣ | 2 | 50 | 2,48,000-00 | 24,800-00 | 31-08-2008 |
| 2 | ಕನಕಪುರ | ಬನಂತಮಾರಿ ಎಸ್.ಎಫ್ | ನೆಡುತೋಪು ನಿರ್ಮಾಣ | 2 | 50 | 2,48,000-00 | 24,800-00 | 31-08-2008 |
| 3 | ಚನ್ನಪಟ್ಟಣ | ಕಬ್ಬಾಳ್ ಎಸ್.ಎಫ್. | ನೆಡುತೋಪು ನಿರ್ಮಾಣ | 2 | 50 | 2,48,000-00 | 24,800-00 | 31-08-2008 |
| 4 | ಸಾತನೂರು | ಚಿಲಂದವಾಡಿ ಎಸ್.ಎಫ್. | ನೆಡುತೋಪು ನಿರ್ಮಾಣ | 2 | 50 | 2,48,000-00 | 24,800-00 | 31-08-2008 |
| 5 | ಚನ್ನಪಟ್ಟಣ | ತೆಂಗಿನಕಲ್ಲು ಎಸ್.ಎಫ್. | ನೆಡುತೋಪು ನಿರ್ಮಾಣ | 4 | 25 | 2,89,500-00 | 28,950-00 | 31-08-2008 |
| 6 | ರಾಮನಗರ | ಹಂದಿಗುಂದಿ ಎಸ್.ಎಫ್. | ನೆಡುತೋಪು ನಿರ್ಮಾಣ | 4 | 25 | 2,89,500-00 | 28,950-00 | 31-08-2008 |
| 7 | ರಾಮನಗರ | ಹಂದಿಗುಂದಿ ಎಸ್.ಎಫ್. | ನೆಡುತೋಪು ನಿರ್ಮಾಣ | 5 | 25 | 1,89,500-00 | 18,950-00 | 31-08-2008 |
| 8 | ಚನ್ನಪಟ್ಟಣ | ತೆಂಗಿನಕಲ್ಲು ಎಸ್.ಎಫ್. | ನೆಡುತೋಪು ನಿರ್ಮಾಣ | 5 | 50 | 3,79,000-00 | 37,900-00 | 31-08-2008 |
| 9 | ಚನ್ನಪಟ್ಟಣ | ಕೊಂಬಿನಕಲ್ಲು ಎಸ್.ಎಫ್. | ಮಾನ್‌ಸೂಸ್ ಕಾಮಗಾರಿ ಕೈಗೊಳ್ಳುವುದು | 1 | 50 | 3,49,500-00 | 34,950-00 | 31-07-2008 |

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಯೋಜನೆ ಮತ್ತು ಮಾದರಿ | ಭೌತಿಕ (ಹೆ.ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರ್ೈಸಬೇಕಾದ ದಿನಾಂಕ |
|---|---|---|---|---|---|---|---|---|
| 10 | ರಾಮನಗರ | ಹುಲ್ತಾರ್ ಎಸ್.ಎಫ್ | ಮಾನ್‌ಸೂಸ್ ಕಾಮಗಾರಿ ಕೈಗೊಳ್ಳುವುದು | 1 | 50 | 3,49,500-00 | 34,950-00 | 31-07-2008 |
| 10 | ಸಾತನೂರು | ಬಸವನಬೆಟ್ಟ ಎಸ್.ಎಫ್. | ಮಾನ್‌ಸೂಸ್ ಕಾಮಗಾರಿ ಕೈಗೊಳ್ಳುವುದು | 1 | 50 | 3,49,500-00 | 34,950-00 | 31-07-2008 |
| 11 | ಚನ್ನಪಟ್ಟಣ | ಕೊಂಬಿನಕಲ್ಲು ಎಸ್.ಎಫ್. | ಮಣ್ಣು ಸಂರಕ್ಷಣಾ ಕಾಮಗಾರಿ | 1 | 50 | 79,000-00 | 7,900-00 | 30-06-2008 |
| 12 | ರಾಮನಗರ | ಹುಲ್ತಾರ್ ಎಸ್.ಎಫ್ | ಮಣ್ಣು ಸಂರಕ್ಷಣಾ ಕಾಮಗಾರಿ | 1 | 50 | 79,000-00 | 7,900-00 | 30-06-2008 |
| 13 | ಸಾತನೂರು | ಬಸವನಬೆಟ್ಟ ಎಸ್.ಎಫ್. | ಮಾನ್‌ಸೂಸ್ ಕಾಮಗಾರಿ ಕೈಗೊಳ್ಳುವುದು | 1 | 50 | 79,000-00 | 7,900-00 | 30-06-2008 |

**2. 12 ನೇ ಆರ್ಥಿಕ ಅಯೋಗ ಯೋಜನೆಯಡಿಯಲ್ಲಿ ಕೈಗೊಳ್ಳಬೇಕಾದ ಕಾಮಗಾರಿಗಳ ವಿವರ.**

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಭೌತಿಕ (ಹೆ.ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರ್ೈಸಬೇಕಾದ ದಿನಾಂಕ |
|---|---|---|---|---|---|---|---|
| 1 | ಚನ್ನಪಟ್ಟಣ | ಕಬ್ಬಾಳ್ ಎಸ್.ಎಫ್ | ನೆಡುತೋಪು ನಿರ್ಮಾಣ | 25 | 2,75,000-00 | 27,500-00 | 31-03-2009 |

**3. ಕೆ.ಎಫ್.ಡಿ.ಎಫ್ ಯೋಜನೆಯಡಿಯಲ್ಲಿ ಕೈಗೊಳ್ಳಬೇಕಾದ ಕಾಮಗಾರಿಗಳ ವಿವರ.**

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಭೌತಿಕ (ಹೆ.ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರ್ೈಸಬೇಕಾದ ದಿನಾಂಕ |
|---|---|---|---|---|---|---|---|
| 1 | ಸಾತನೂರು | ಬಸವನಬೆಟ್ಟ ಎಸ್.ಎಫ್ | ನೆಡುತೋಪು ನಿರ್ಮಾಣ | 25 | 2,75,000-00 | 27,500-00 | 31-03-2009 |

**4. ಆರ್.ಓ.ಇ (ಅರಣ್ಯ ಅತಿಕ್ರಮಣ ತೆರವುಗೊಳಿಸಿರುವ ಜಾಗದಲ್ಲಿ ನೆಡುತೋಪು ಬೆಳೆಸುವುದು) ಯೋಜನೆಯಡಿಯಲ್ಲಿ ಕೈಗೊಳ್ಳಬೇಕಾದ ಕಾಮಗಾರಿಗಳ ವಿವರ.**

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಭೌತಿಕ (ಹೆ.ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರ್ೈಸಬೇಕಾದ ದಿನಾಂಕ |
|---|---|---|---|---|---|---|---|
| 1 | ಚನ್ನಪಟ್ಟಣ | ಚಿಕ್ಕಮಣ್ಣುಗುಡ್ಡೆ ಎಸ್.ಎಫ್ | ನೆಡುತೋಪು ನಿರ್ಮಾಣ | 50 | 5,50,000 -00 | 55,000 -00 | 31-08-2008 |

**5. ಸಿ.ಓ.ಪಿ. ಯೋಜನೆಯಡಿಯಲ್ಲಿ ಕೈಗೊಳ್ಳಬೇಕಾದ ಕಾಮಗಾರಿಗಳ ವಿವರ.**

| ಕ್ರ. ಸಂ. | ವಲಯದ ಹೆಸರು | ಸ್ಥಳದ ಹೆಸರು | ಕಾಮಗಾರಿಯ ವಿವರ | ಭೌತಿಕ (ಹೆ.ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರೈಸಬೇಕಾದ ದಿನಾಂಕ |
|---|---|---|---|---|---|---|---|
| 1 | ರಾಮನಗರ | ಹಂದಿಗುಂದಿ ಎಸ್.ಎಫ್. | ನೆಡುತೋಪು ನಿರ್ಮಾಣ | 20 | 220,000 -00 | 22,000 -00 | 31-08-2008 |
| 2 | ರಾಮನಗರ | ಅಂಕನಹಳ್ಳಿ ಎಸ್.ಎಫ್. | ನೆಡುತೋಪು ನಿರ್ಮಾಣ | 25 | 2,75,000 -00 | 27,500 -00 | 31-08-2008 |

**6.ನೇಚರ್ ಕರ್ನ್ಸ್‌ವೇಶನ್ ಆಫ್ ವೈಲ್ಡ್ ಲೈಫ್ – 139 ಮೇಜರ್ ವರ್ಕ್ಸ್**

| ಕ್ರ. ಸಂ. | ವಲಯದ ಹೆಸರು | ಕಾಮಗಾರಿಯ ವಿವರ | ಭೌತಿಕ (ಕಿ.ಮೀ. ಗಳಲ್ಲಿ) | ಟೆಂಡರ್ ಅಂದಾಜು ಮೊತ್ತ (ರೂ. ಗಳಲ್ಲಿ) | ಇ.ಎಂ.ಡಿ ಮೊತ್ತ (ರೂ.ಗಳಲ್ಲಿ) | ಕಾಮಗಾರಿ ಪೂರೈಸಬೇಕಾದ ದಿನಾಂಕ |
|---|---|---|---|---|---|---|
| 1 | ಕನಕಪುರ | ಆನೆ ನಿರೋಧಕ ಕಂದಕ | 2 | 3,40,000-00 | 34,000-00 | 30-06-2008 |
| 2 | ಚನ್ನಪಟ್ಟಣ | ಆನೆ ನಿರೋಧಕ ಕಂದಕ | 2 | 3,40,000-00 | 34,000-00 | 30-06-2008 |
| 3 | ಸಾತನೂರು | ಆನೆ ನಿರೋಧಕ ಕಂದಕ | 2 | 3,40,000-00 | 34,000-00 | 30-06-2008 |

**ನಿಬಂಧನೆಗಳು**

1. ಟೆಂಡರ್ ಫಾರಂಗಳನ್ನು ಫಾರಂಗೆ ರೂ. 200–00 ಹಾಗೂ ತೆರಿಗೆ ಪಾವತಿ ಮಾಡಿ ದಿನಾಂಕ 19-06-2008 ಕಛೇರಿ ಕೆಲಸದ ವೇಳೆಯಲ್ಲಿ ಅಪರಾಹ್ನ 1.00 ಗಂಟೆಯವರೆಗೆ ಪಡೆಯಬಹುದು ಮತ್ತು ಟೆಂಡರ್ ನಲ್ಲಿ ಭಾಗವಹಿಸಲು ಇಚ್ಚೆಯುಳ್ಳವರು ಈ ವಿಭಾಗದಲ್ಲಿ 2008–09 ನೇ ಸಾಲಿಗೆ ತಮ್ಮ ಹೆಸರುಅನ್ನು ಅರಣ್ಯ ಗುತ್ತಿಗೆದಾರರಾಗಿ ನೋಂದಾಯಿಸಿಕೊಳ್ಳಬೇಕು. ತಪ್ಪಿದ್ದಲ್ಲಿ ಅಂತವರ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
2. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಪ್ರತಿ ಬ್ಲಾಕ್‌ಗೆ ಸಂಬಂಧಿಸಿದಂತೆ ಪ್ರತ್ಯೇಕವಾದ ಮೊಹರು ಲಕೋಟೆಯಲ್ಲಿ ಪ್ರತ್ಯೇಕವಾಗಿ ಇಎಂಡಿಯೊಂದಿಗೆ ಸಲ್ಲಿಸುವುದು.
3. ಭರ್ತಿ ಮಾಡಿದ ಟೆಂಡರ್ ಫಾರಂ ಅನ್ನು 19-06-2008 ರಂದು ಅಪರಾಹ್ನ 3.00 ಗಂಟೆಯವರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ಅಥವಾ ಅವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳು ಸ್ವೀಕರಿಸುವರು ಮತ್ತು ಮೇಲ್ಕಂಡ ದಿನಾಂಕದಂದು ಯಾವುದೇ ಕಾರಣದಿಂದಾಗಿ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನ: ದಿನಾಂಕ 26-06-2008 ರಂದು ಅಪರಾಹ್ನ 4.00 ಗಂಟೆಗೆ ಟೆಂಡರನ್ನು ತೆರೆಯಲಾಗುವುದು ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ.
4. ಈ ಸದರಿ ಕಾಮಗಾರಿಗಳು ಕಾಲಬದ್ದ ಕೆಲಸಗಳಾಗಿದ್ದು, ಒಂದು ಪಕ್ಷ ಯಾವುದಾದರೂ ಕಾಮಗಾರಿಯನ್ನು ಟೆಂಡರ್ ಮುಂಚೆ ಕೈಗೊಂಡಿದ್ದ ಪಕ್ಷದಲ್ಲಿ ಮತ್ತು ಕೆಲವು ಕೆಲಸಗಳನ್ನು ಕೈಬಿಡಬೇಕಾದ ಸಂದರ್ಭದಲ್ಲಿ ಅಂತಹ ಕೆಲಸಗಳನ್ನು ಈ ಪ್ರಕಟಣೆಯ ಟೆಂಡರಿನಿಂದ ಹೊರತುಪಡಿಸಿ ಉಳಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಟೆಂಡರ್‌ದಾರರಿಗೆ ಕಾಮಗಾರಿ ಕೈಗೊಳ್ಳಲು ಆದೇಶ ನೀಡಲಾಗುವುದು.
5. ಪ್ರತಿ ಟೆಂಡರ್ ದಾರರು ಈ ಕಾಮಗಾರಿಗಳನ್ನು ನೆರವೇರಿಸಲು ಅಗತ್ಯವಿರುವ ಸಲಕರಣೆಗಳನ್ನು ಹಾಗೂ ಸಾಗಾಣಿಕೆ ವ್ಯವಸ್ಥೆಯನ್ನು ಅವರೇ ಸ್ವಂತವಾಗಿ ಮಾಡಿಕೊಳ್ಳಬೇಕು.
6. ಈ ಮೇಲಿನ ಕೆಲಸಗಳಿಗೆ ಟೆಂಡರ್ ಸಲ್ಲಿಸಲು ಇಚ್ಚಿಸುವ ಗುತ್ತಿಗೆದಾರರು ಆಯಾ ಕೆಲಸಕ್ಕೆ ನಿಗಧಿಪಡಿಸಿರುವ ಇಎಂಡಿ ಹಾಗೂ ಭದ್ರತಾ ಠೇವಣಿ ಮೊತ್ತಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ಇವರ ಪರವಾಗಿ ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಡಿಡಿ ರೂಪದಲ್ಲಿ ಟೆಂಡರ್ ಜೊತೆಗೆ ಸಲ್ಲಿಸಬೇಕಾಗುತ್ತದೆ.
7. ಗುತ್ತಿಗೆದಾರರು ಷರತ್ತುಗಳನ್ನೊಳಗೊಂಡ ಟೆಂಡರ್‌ಗಳನ್ನು ಸಲ್ಲಿಸಿದಲ್ಲಿ ಅಂತಹವನ್ನು ತಿರಸ್ಕರಿಸಲಾಗುವುದು. ಇದರ ಬಗ್ಗೆ ಏನಾದರೂ ತಕರಾರುಗಳು ಉದ್ಬವವಾದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಮನಗರ ವಿಭಾಗ, ರಾಮನಗರರವರ ತೀರ್ಮಾನವೇ ಅಂತಿಮವಾಗಿರುತ್ತದೆ.

8. ನಿಗದಿಪಡಿಸಿದ ಅವಧಿಯ ನಂತರ ಬಂದ ಟೆಂಡರ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
9. ಯಾವುದೇ ಕಾರಣ ನೀಡದೆ ಟೆಂಡರ್‌ಗಳನ್ನು ಒಪ್ಪುವ ಹಾಗೂ ತಿರಸ್ಕರಿಸುವ ಹಕ್ಕನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ರವರು ಕಾಯ್ದಿರಿಸಿಕೊಂಡಿರುತ್ತಾರೆ.
10. ಟೆಂಡರ್‌ನಲ್ಲಿ ಯಶಸ್ವಿಯಾದ ಅರಣ್ಯ ಗುತ್ತಿಗೆದಾರರಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ಇವರಿಂದ ತಿಳುವಳಿಕೆ ನೀಡಿದ 7 ದಿವಸಗಳ ಒಳಗಾಗಿ ನಿರ್ದಿಷ್ಟ ನಮೂನೆಯಲ್ಲಿ ಕರಾರು ನಾಮೆಯನ್ನು ಸಹಿ ಮಾಡತಕ್ಕದ್ದು, ಈ ಅವಧಿಯನ್ನು ವಿಸ್ತರಿಸುವ ಅಧಿಕಾರ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗ, ರಾಮನಗರ ಇವರು ಹೊಂದಿರುತ್ತಾರೆ.
11. ಈ ಮೇಲಿನ ಕಾಮಗಾರಿಗಳ ಅನುಷ್ಠಾನ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ವಾರ್ಷಿಕ ಕ್ರಿಯಾಯೋಜನೆಯ ಅನುಮೋದನೆ ನಿಬಂಧನೆಗೆ ಒಳಪಟ್ಟಿರುತ್ತದೆ. ಒಂದು ಪಕ್ಷ ಸರ್ಕಾರದಿಂದ ಹಣ ಬಿಡುಗಡೆ ತಡವಾದ ಪಕ್ಷದಲ್ಲಿ ಅಂತಹ ಹಣ ಪಾವತಿಗಾಗಿ ಯಾವುದೇ ತರಹದ ಬಡ್ಡಿ ನೀಡಲಾಗುವುದಿಲ್ಲ.
12. ಎಲ್ಲಾ ಕೆಲಸಗಳು ಆಗಿಂದಾಗ್ಗೆ ಮುಕ್ತಾಯವಾದ ನಂತರ ಸದರಿ ಕೆಲಸಗಳನ್ನು ನಿಯಮದಂತೆ ಸಂಬಂಧಿಸಿದ ಅಧಿಕಾರಿಗಳಿಂದ ತನಿಖೆ ಮಾಡಿಸಿ ವಲಯ ಅರಣ್ಯಾಧಿಕಾರಿಗಳ ಮುಖಾಂತರ ಬಿಲ್ಲುಗಳನ್ನು ಅಳತೆ ಪುಸ್ತಕದೊಂದಿಗೆ (ಎಂಬಿ/ಎಫ್.ಎನ್.ಬಿ) ಒಪ್ಪಿಸಬೇಕಾಗುತ್ತದೆ ಮತ್ತು ಬಿಲ್ ಸಂದಾಯ ಮಾಡುವಾಗ ಸದರಿ ಬಿಲ್‌ಗಳಲ್ಲಿ ನಿಯಮದಂತೆ ಚಾಲ್ತಿಯಲ್ಲಿರುವ ಆದಾಯ ತೆರಿಗೆ, ಮಾರಾಟ ತೆರಿಗೆ, ಸರ್‌ಚಾರ್ಜ್ ಮತ್ತು ಭದ್ರತಾ ಠೇವಣಿ ಹಣವನ್ನು ಕಡಿತಗೊಳಿಸಲಾಗುವುದು ಮತ್ತು ಆಗಿಂದಾಗ್ಗೆ ಬದಲಾಗುವ ತೆರಿಗೆಗಳ ವ್ಯತ್ಯಾಸವನ್ನು ಸಹ ನಿಯಮದಂತೆ ಕಡಿತಗೊಳಿಸಲಾಗುವುದು.
13. ಕೆಲಸಗಳನ್ನು ನಿರ್ವಹಿಸುವಾಗ ಇತರೆ ನೆಡುತೋಪುಗಳನ್ನು ಹಾಳು ಮಾಡಿದಲ್ಲಿ ಗಿಡ ಮರಗಳನ್ನು ಕಡಿದು ನಾಶಪಡಿಸಿದಲ್ಲಿ ಸರ್ಕಾರಕ್ಕೆ ಆದ ನಷ್ಟದ ಬಗ್ಗೆ ಸಂಬಂಧಪಟ್ಟ ಗುತ್ತಿಗೆದಾರರ ಮೇಲೆ ಕಾನೂನಿನ ಕ್ರಮ ಜರುಗಿಸಲಾಗುವುದು.
14. ಕೆಲಸಗಳ ವಿವರಗಳು ಮತ್ತು ಹೆಚ್ಚಿನ ನಿಬಂಧನೆಗಳನ್ನು ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ತಿಳಿದುಕೊಳ್ಳಬಹುದಾಗಿದೆ.
15. ಯಾವುದೇ ವಿಭಾಗದಲ್ಲಿ ಗುತ್ತಿಗೆದಾರರು ಡಿಫಾಲ್ಟ್‌ರ್ ಆಗಿದ್ದರೆ ಅಂತಹವರು ಟೆಂಡರ್‌ನಲ್ಲಿ ಭಾಗವಹಿಸಲು ಅರ್ಹರಾಗಿರುವುದಿಲ್ಲ.
16. ಗುತ್ತಿಗೆದಾರರು ನೇಮಿಸಿಕೊಳ್ಳುವ ಕೆಲಸಗಾರರಿಗೆ ಸರ್ಕಾರದ ನಿಯಮದಂತೆ ಮಜೂರಿ ಮತ್ತಿತರ ಅನುಕೂಲಗಳನ್ನು ಸ್ವತ: ಗುತ್ತಿಗೆದಾರರೇ ವಹಿಸಬೇಕು. ಇಲಾಖೆಯು ಗುತ್ತಿಗೆದಾರರ ಮತ್ತು ಅವರ ನೌಕರರಿಗೆ ಯಾವುದೇ ಆದ ನಷ್ಟ ಇತ್ಯಾದಿಗಳಿಗೆ ಜವಾಬ್ದಾರರಲ್ಲ.
17. ಟೆಂಡರ್‌ನಲ್ಲಿ ನಮೂದಿಸಿದ ಹಣವು ಅಂದಾಜು ಪಟ್ಟಿಗಳ ಅಂದಾಜು ದರವಾಗಿರುತ್ತದೆ. (ಅಪ್ರಾಕ್ಸಿಮೇಟ್) ಹಣವನ್ನು ಪಾವತಿಸುವಾಗ ಮಂಜೂರಾದ ಅಂದಾಜು ಪಟ್ಟಿಯಂತೆ ಹಣ ಪಾವತಿಸಲಾಗುವುದು.
18. ಕಾಮಗಾರಿಯನ್ನು ಅರಣ್ಯ ಇಲಾಖೆಯಿಂದ ಪರಿಶೀಲಿಸಿ ಮಂಜೂರಾದ ಅಂದಾಜು ಪಟ್ಟಿಯ ಅನುಗುಣವಾಗಿ ಮಾಡಬೇಕಾಗಿರುತ್ತದೆ. ಕಾಮಗಾರಿಯ ಗುಣಮಟ್ಟವು ವಲಯ ಅರಣ್ಯಾಧಿಕಾರಿ, ಸಹಾಯಕ ಅರಣ್ಯಾಧಿಕಾರಿಗಳು ಇವರು ಕಾಲಕಾಲಕ್ಕೆ ನೀಡುವ ಲಿಖಿತ/ಮೌಖಿಕ ಆದೇಶಕ್ಕನುಗುಣವಾಗಿ ಇರತಕ್ಕದ್ದು. ಕೆಲಸಗಳಲ್ಲಿ ಏನಾದರೂ ಪರಿವರ್ತನೆ ಅಥವ ಮಾರ್ಪಾಡು ಮಾಡುವುದು ಅವಶ್ಯವೆಂದು ಕಂಡುಬಂದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಲಿಖಿತ ಆದೇಶದ ಮೇರೆಗೆ ಅಂತಹ ಪರಿವರ್ತನೆ ಅಥವಾ ಮಾರ್ಪಾಡುಗಳನ್ನು ಮಂಜೂರಾದ ದರದಲ್ಲಿಯೇ ಮಾಡಲು ಗುತ್ತಿಗೆದಾರರು ಬದ್ಧರಾಗಿರಬೇಕಾಗಿರುತ್ತದೆ.
19. ವಲಯ ಅರಣ್ಯಧಿಕಾರಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಕಾರಿಗಳ ನಿರ್ದೇಶನದಂತೆ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು ಗುತ್ತಿಗೆಯ ಅವಧಿಯನ್ನು ಸಾಮಾನ್ಯವಾಗಿ ವಿಸ್ತರಿಸಲಾಗುವುದಿಲ್ಲ. ನಿಗಧಿತ ಅವಧಿಯಲ್ಲಿ ಕಾಮಗಾರಿಗಳನ್ನು ಪೂರ್ಣಗೊಳಿಸತಕ್ಕದ್ದು ಅತಿ ವಿಶೇಷ ಸಂದರ್ಭಗಳು ಬಂದಲ್ಲಿ ವಿಸ್ತರಣಾ ಅವಧಿಯಲ್ಲಿ

ಮಾಡಿದ ಕೆಲಸಗಳಿಗೆ ಗುತ್ತಿಗೆ ದರಗಳಲ್ಲಿ ಶೇ. 5 ರಂತೆ ಕಡಿತದೊಂದಿಗೆ ಅವಧಿಯನ್ನು ವಿಸ್ತರಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಯವರು ಹೊಂದಿರುತ್ತಾರೆ. ವಲಯ ಅರಣ್ಯ ಅಧಿಕಾರಿ ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿರವರು ನೀಡಿದ ನಿರ್ದೇಶನದಂತೆ ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸದಿದ್ದಲ್ಲಿ ಅಂತಹ ಕಾಮಗಾರಿಗಳಿಗೆ ಹಣವನ್ನು ಪಾವತಿಸಲಾಗುವುದಿಲ್ಲ ಮತ್ತು ಇಎಂಡಿ ಹಾಗೂ ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

20. ಟೆಂಡರ್‌ನ್ನು ಕಂಪನಿಯ ವತಿಯಿಂದ / ಸಂಘ ಸಂಸ್ಥೆಗಳು ಕೊಡುವ ಪಕ್ಷದಲ್ಲಿ
    ಅ) ಕಂಪನಿಯ/ ಸಂಘ ಸಂಸ್ಥೆಗಳ ನೋಂದಾಯಿತ ಸಂಸ್ಥೆಗಳಾಗಿರಬೇಕು.
    ಆ) ಕಂಪನಿಯ ಎಲ್ಲಾ ಪಾಲುದಾರರಿಗೆ ಟೆಂಡರ್‌ನ್ನು ಸಹಿ ಮಾಡಲು ಸಾಧ್ಯವಾಗದಿದ್ದಲ್ಲಿ ಟೆಂಡರ್ ಸಹಿ ಮಾಡುವ ವ್ಯಕ್ತಿಯು ಈ ಬಗ್ಗೆ ಅಧಿಕಾರ ಪತ್ರ (Power of Attorney) ಪಡೆದುಕೊಂಡಿರಬೇಕು. ಇಂತಹ ಪತ್ರವನ್ನು ಟೆಂಡರ್‌ಗೆ ಲಗತ್ತಿಸಬೇಕು.
21. ಅರಣ್ಯ ಕೂಲಿಕಾರರ ಸಹಕಾರ ಸಂಘಗಳು ಈ ಕೆಲಸಗಳಿಗೆ ಟೆಂಡರ್ ಕೊಡಲು ಇಚ್ಛಿಸಿದಲ್ಲಿ ಇಎಂಡಿ ಮತ್ತು ಭದ್ರತಾ ಠೇವಣಿಯನ್ನು ಕಡ್ಡಾಯವಾಗಿ ನೀಡಬೇಕಾಗುವುದು ಹಾಗೂ ಸಂಘಗಳ ನೋಂದಣಿ ನಿಯಮದಂತೆ ಸಂಘಗಳೂ ಕಡ್ಡಾಯವಾಗಿ ನೊಂದಣಿಯಾಗಿರಬೇಕು. ಇಲ್ಲವಾದಲ್ಲಿ ಟೆಂಡರ್‌ನ್ನು ತಿರಸ್ಕರಿಸಲಾಗುವುದು.
22. ಯಶಸ್ವಿ ಟೆಂಡರ್‌ದಾರರು ಕರಾರು ನಾಮೆಯನ್ನು ಸಹಿ ಮಾಡಿದ ನಂತರ ಟೆಂಡರನ್ನು ಹಿಂತೆಗೆದುಕೊಂಡಲ್ಲಿ ನಿಗಧಿತ ಸಮಯದಲ್ಲಿ ಕಾಮಗಾರಿ ಪ್ರಾರಂಭಿಸದಿದ್ದಲ್ಲಿ, ಕಾಮಗಾರಿಯ ಬಗ್ಗೆ ನಿರಾಸಕ್ತಿ ಹೊಂದಿದಲ್ಲಿ ಟೆಂಡರ್‌ದಾರರ ಇಎಂಡಿ ಮತ್ತು ಭದ್ರತಾ ಠೇವಣಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೇ ಗುತ್ತಿಗೆ ಕೆಲಸವನ್ನು ಮೂಲ ಗುತ್ತಿಗೆದಾರರ ಖರ್ಚು ಮತ್ತು ಜವಾಬ್ದಾರಿಯ ಮೇಲೆ ಮರು ಟೆಂಡರ್ ಮಾಡಲಾಗುವುದು. ಟೆಂಡರ್‌ಗೆ ಕಾಲಾವಕಾಶ ಇಲ್ಲದಿದ್ದಲ್ಲಿ ಇಲಾಖೆಯಿಂದ ಕಾಮಗಾರಿಯನ್ನು ಪೂರ್ಣಗೊಳಿಸಿ ಸರ್ಕಾರಕ್ಕೆ ಹಾನಿಯಾದ ಮೊತ್ತವನ್ನು ಕರ್ನಾಟಕ ಅರಣ್ಯ ಸಂಹಿತೆ 1963 ಕಾಲಂ 109 ಮತ್ತು 119 ರಂತೆ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲು ಮಾಡಲಾಗುವುದು.
23. ಯಶಸ್ವಿ ಬಿಡ್ಡುದಾರರು ಕಾಮಗಾರಿಗಳನ್ನು ಪೂರ್ಣಗೊಳಿಸಿದ ನಂತರ ಹಣ ಪಾವತಿಸುವಾಗ ಬಿಲ್ಲಿನ ಮೊತ್ತದ ಶೇಕಡ 5 ರಷ್ಟು ಮೊತ್ತವನ್ನು ಭದ್ರತಾ ಠೇವಣಿಯಾಗಿ ಹಿಡಿಯಲಾಗುವುದು. ಈ ಹಣವನ್ನು ನೆಡುತೋಪು ನಿರ್ಮಾಣ ಬಗ್ಗೆ ವಲಯ ಅರಣ್ಯಾಧಿಕಾರಿಗಳು ಮತ್ತು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಿಂದ ಧೃಡೀಕರಣ ಪತ್ರ ನೀಡಿದ ನಂತರ ಭದ್ರತಾ ಠೇವಣಿ ಮೊತ್ತವನ್ನು ಹಿಂದಿರುಗಿಸಲಾಗುವುದು.
24. ಕೆಲಸ ಪೂರ್ಣಗೊಂಡ ದಿನಾಂಕ 1 ವರ್ಷದ ಒಳಗಾಗಿ ಕಾಮಗಾರಿಯಲ್ಲಿ ಯಾವುದೇ ದೋಷ ಕಂಡುಬಂದಲ್ಲಿ ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಲ್ಲಿ ದೋಷ ಪರಿಹರಿಸಬೇಕಾಗುತ್ತದೆ. ನಂತರ ಭದ್ರತಾ ಠೇವಣಿ ಹಿಂತಿರುಗಿಸಲಾಗುವುದು. ತಪ್ಪಿದಲ್ಲಿ ಭದ್ರತಾ ಠೇವಣಿಯಲ್ಲಿ ಸದರಿ ಖರ್ಚನ್ನು ಭರಿಸಲಾಗುವುದು.
25. ಗುತ್ತಿಗೆದಾರರು ನೇಮಿಸಿಕೊಂಡಿರುವ ಕೂಲಿ ಕಾರ್ಮಿಕರಿಗೆ ಅಪಘಾತ/ ಇನ್ನಿತರ ಹಾನಿಗಳು ಸಂಭವಿಸಿದಲ್ಲಿ ನಷ್ಟ ಪರಿಹಾರವನ್ನು ಗುತ್ತಿಗೆದಾರರೇ ನೀಡಬೇಕಾಗುತ್ತದೆ.
26. ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಲಿಖಿತ ಅನುಮತಿ ಇಲ್ಲದೇ ಯಾವುದೇ ಕೆಲಸವನ್ನು ಟೆಂಡರುದಾರರು ಪ್ರಾರಂಭಿಸಬಾರದು.
27. ಟೆಂಡರ್ ಫಾರಂ ನೀಡುವ ದಿನಗಳಲ್ಲಿ ಗುತ್ತಿಗೆದಾರರ ನೋಂದಣಿಯನ್ನು ಮಾಡಲಾಗುವುದಿಲ್ಲ.
28. ಕಾಲ ಕಾಲಕ್ಕೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ಇವರು ವಿಧಿಸುವ ಷರತ್ತಿಗೆ ಗುತ್ತಿಗೆದಾರರು ಬದ್ಧರಾಗಿರಬೇಕು.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ರಾಮನಗರ ಪ್ರಾದೇಶಿಕ ವಿಭಾಗ,
ರಾಮನಗರ.

ಪಿ.ಆರ್. 287

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು

### ಟೆಂಡರ್ ಆಹ್ವಾನ ಪ್ರಕಟಣೆ

**ಸಂಖ್ಯೆ: ತೋಉನಿ:ಕಉ:ವಿನಿ2:1:2008-09, ದಿನಾಂಕ:12ನೇ ಮೇ 2008.**

ಲಾಲ್‌ಬಾಗ್ ಸಸ್ಯತೋಟ ಹಾಗೂ ಕಬ್ಬನ್ ಉದ್ಯಾನವನ ಮತ್ತು ಅಧೀನದ ವಿವಿಧ ವಿಭಾಗಗಳ ಉದ್ಯಾನವನಗಳ ಉಪಯೋಗಕ್ಕೆ ವರ್ಷದಲ್ಲಿ ಎರಡು ಭಾರಿ ನಡೆಯುವ ಫಲಪುಷ್ಪ ಪ್ರದರ್ಶನದ ಸಲುವಾಗಿ ಕುಂಡಗಳಲ್ಲಿ ಬೆಳೆಸುವ ಅಲಂಕಾರಿಕ ಹೂವಿನ ಗಿಡಗಳ : ಹೂವಿನ ಮಡಿಗಳಃ ಹುಲ್ಲುಹಾಸುಗಳ ಅಭಿವೃದ್ಧಿಗೆ ಬೇಕಾಗುವ ಕೊಟ್ಟಿಗೆ ಗೊಬ್ಬರ, ಕುದುರೆಗೊಬ್ಬರ, ಕೆಂಪುಮಣ್ಣು, ಮರಳು, ಮಣ್ಣಿನ ಕುಂಡಗಳು ಇತ್ಯಾದಿ ತೋಟಗಾರಿಕೆ ಸಾಮಾಗ್ರಿ ಹಾಗೂ ಸಲಕರಣೆಗಳನ್ನು 2008-09ನೇ ಸಾಲಿಗಾಗಿ ಒಂದು ವರ್ಷದ ಅವಧಿಯಲ್ಲಿ ಸರಬರಾಜು ಮಾಡುವುದಕ್ಕೆ ಟೆಂಡರ್‌ಗಳನ್ನು ಆಹ್ವಾನಿಸಿ ದರಗಳನ್ನು ಅನುಮೋದಿಸಿಕೊಳ್ಳಬೇಕಾಗಿದೆ. ಆದುದರಿಂದ ಈ ಕೆಳಕಂಡ ಷರತ್ತುಗಳಿಗೆ ಒಪ್ಪಿದಲ್ಲಿ ಈ ಕೆಳಗೆ ಸೂಚಿಸಿದ ಪದಾರ್ಥಗಳನ್ನು ಸರಬರಾಜು ಮಾಡಲು ನಿಗದ್ಧಿತ ಟೆಂಡರ್ ಫಾರಂಗಳನ್ನು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಪಾರ್ಕ್, ಬೆಂಗಳೂರು ರವರ ಕಛೇರಿಯಿಂದ ದಿನಾಂಕ:09.06.2008 ರಿಂದ **11.06.2008** ವರೆಗೆ ರೂ.500/- ದರ ಪಾವತಿಸಿ ಪಡೆಯಬಹುದು. ಭರ್ತಿ ಮಾಡಿದ ಟೆಂಡರ್‌ಗಳನ್ನು ಮೊಹರು ಮಾಡಿದ ಲಕೋಟೆಯೊಂದಿಗೆ ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಪಾರ್ಕ್, ಬೆಂಗಳೂರು ರವರ ಕಛೇರಿಗೆ ದಿನಾಂಕ: 12.06.2008 ರಂದು ಸಂಜೆ 3.00 ಗಂಟೆಯೊಳಗೆ ಸಲ್ಲಿಸಬೇಕು. ಟೆಂಡರ್‌ಗಳನ್ನು ಅದೇ ದಿನ ಸಂಜೆ 4.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು.

### ಷರತ್ತುಗಳು

1 ಟೆಂಡರ್ ಸಲ್ಲಿಸುವ ಸಮಯದಲ್ಲಿ ಪ್ರತಿ ಪರಿಕರ/ಸಾಮಗ್ರಿಗಳ ಟೆಂಡರ್‌ಗೆ ರೂ.10,000/- ಇ.ಎಂ.ಡಿ.ಯಾಗಿ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್ ಅನ್ನು (Deputy Director Of Horticulture Cubbon Park) ರವರ ಹೆಸರಿಗೆ ಪಡೆದು ಸಲ್ಲಿಸಬೇಕು. ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಹಣ ಬಿಟ್ಟು ಉಳಿದ ಟೆಂಡರ್‌ದಾರರ ಇ.ಎಂ.ಡಿ. ಹಣವನ್ನು ಟೆಂಡರ್‌ಗಳ ಪರಿಶೀಲನೆ ನಂತರ ಹಿಂತಿರುಗಿಸಲಾಗುವುದು. ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಹಣವನ್ನು ಧರ ಕರಾರು ಅವಧಿ ಮುಗಿದ ನಂತರ ಹಿಂತಿರುಗಿಸಲಾಗುವುದು. ಈ ಇ.ಎಂ.ಡಿ. ಠೇವಣಿಗೆ ಯಾವುದೇ ಬಡ್ಡಿ ಹಣವನ್ನು ಇಲಾಖೆಯಿಂದ ಪಾವತಿ ಮಾಡಲಾಗುವುದಿಲ್ಲ. ಹಾಗೂ ಪ್ರತಿ ಇ.ಎಂ.ಡಿ. ಜೊತೆ ನಮೂದಿಸಿದ ಸಾಮಾಗ್ರಿ/ ಪದಾರ್ಥಗಳನ್ನು ಸರಬರಾಜು ಮಾಡಲು ರೂ. 5.00 ಲಕ್ಷಗಳ ಬ್ಯಾಂಕ್ ಸಾಲ್ವಿಸಿ ಲಗತ್ತಿಸಬೇಕು. ಬ್ಯಾಂಕ್ ಸಾಲ್ವಿಸಿ ಇಲ್ಲದಿದ್ದ ಟೆಂಡರ್‌ನ್ನು ತಿರಸ್ಕರಿಸಲಾಗುವುದು.

2 ಬೇಕಾಗುವ **ಕೊಟ್ಟಿಗೆ ಗೊಬ್ಬರ** ಅಪ್ಪಟ ಸಗಣಿ ಗೊಬ್ಬರವಾಗಿರಬೇಕು. ಹುಲ್ಲು, ಮಣ್ಣು ಮತ್ತು ಪ್ರಾಣಿಗಳು ವರ್ಜಿತ ಭಾಗಗಳನ್ನು ಸೇರಿಸುವುದು ಇತ್ಯಾದಿ ಬೆರಕೆಯಾಗಿದ್ದಲ್ಲಿ ತಿರಸ್ಕರಿಸಲಾಗುವುದು. ಗೊಬ್ಬರವನ್ನು ಲಾಲ್‌ಬಾಗ್ ಸಸ್ಯತೋಟಕ್ಕೆ ಹಾಗೂ ಕಬ್ಬನ್ ಪಾರ್ಕ್ ಗುತ್ತಿಗೆದಾರರು ಸ್ವಂತ ಖರ್ಚಿನಲ್ಲಿ ಸಾಗಾಣಿಕೆ ಮಾಡಿ ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಪಾರ್ಕ್ ಕಛೇರಿ ಅಧಿಕಾರಿಗಳು ಸೂಚಿಸಿರುವ ಸ್ಥಳದಲ್ಲಿ ಸಾರುವೆ ಹಾಕಿ ಪ್ರತಿ ಘನಮೀಟರ್‌ಗೆ ದರವನ್ನು ಸೂಚಿಸಬೇಕು.

3 ಬೇಕಾಗುವ **ಕುದುರೆ ಗೊಬ್ಬರ**ವು ಅಪ್ಪಟ ಕುದುರೆ ಲದ್ದಿ ಆಗಿರಬೇಕು. ಹುಲ್ಲು, ಮಣ್ಣು, ಭತ್ತದ ಹುಲ್ಲು, ಹೊಟ್ಟು ಇತ್ಯಾದಿ ಬೆರಕೆ ಆಗಿದ್ದಲ್ಲಿ ತಿರಸ್ಕರಿಸಲಾಗುವುದು. ಗೊಬ್ಬರವನ್ನು ಗುತ್ತಿಗೆದಾರರು ಲಾಲ್‌ಬಾಗ್ ಸಸ್ಯತೋಟಕ್ಕೆ ಹಾಗೂ ಕಬ್ಬನ್ ಪಾರ್ಕ್‌ಗೆ ಸರಬರಾಜು ಮಾಡಿ ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಪಾರ್ಕ್ ಮತ್ತು ಲಾಲ್‌ಬಾಗ್ ಕಛೇರಿ ಅಧಿಕಾರಿಗಳು ಸೂಚಿಸುವ ಸ್ಥಳದಲ್ಲಿ ಸಾರುವೆ ಮಾಡಿ ಘನ ಮೀಟರ್ ಮಾಪಕದಲ್ಲಿ ಅಳತೆ ತೋರಿಸಬೇಕು. ನಿಗದ್ಧಿತ ಟೆಂಡರ್ ನಮೂನೆಯಲ್ಲಿ ಪ್ರತಿ ಘನ ಮೀಟರ್‌ಗೆ ದರವನ್ನು ಸೂಚಿಸಬೇಕು.

4 ಬೇಕಾಗುವ **ಮರಳು** ಬಿಳಿ ಬಣ್ಣದ ನಯವಾದ ಗ್ರಾವೆಲ್ ಬೆರೆಕೆ ಇಲ್ಲದ ಮರಳನ್ನು ಸರಬರಾಜು ಮಾಡಬೇಕು ಹಾಗೂ ಸರಿಯಾದ ಪ್ರಮಾಣದಲ್ಲಿ ಇರಬೇಕು. ನಿಯಮಾನುಸಾರ ಪ್ರತಿ ಸಿ.ಎಂ.ಟಿ.ಗೆ ರೂ.46/- ರಂತೆ ಬಿಲ್ಲಿನ ಮೂಲದಲ್ಲಿ ರಾಯಲ್ಟಿ ಕಟಾಯಿಸಲಾಗುವುದು. ನಿಯಮಾನುಸಾರ ಅನ್ವಯವಾಗುವ ತೆರಿಗೆಗಳನ್ನು ಕಟಾಯಿಸ ಲಾಗುವುದು. ಒಂದು ವೇಳೆ ಮರಳು ಖರೀದಿಸಿದ ಸ್ಥಳದಲ್ಲಿ ರಾಯಲ್ಟಿ ಪಾವತಿ ಮಾಡಿದ್ದಲ್ಲಿ ಅದರ ದಾಖಲೆಗಳನ್ನು ಈ ಕಛೇರಿಗೆ ಒದಗಿಸಬೇಕು ಹಾಗೂ ಪ್ರತಿ ಘನ ಮೀಟರ್‌ಗೆ ದರವನ್ನು ಸೂಚಿಸಬೇಕು.

5 ಬೇಕಾಗುವ **ಕೆಂಪುಮಣ್ಣು** ಉತ್ತಮ ಗುಣಮಟ್ಟದ ಅಪ್ಪಟ ಕೆಂಪುಬಣ್ಣದ ಮಣ್ಣು (ಟಾಪ್ ಸಾಯಿಲ್) ಆಗಿರಬೇಕು. ಹಾಗೂ ನಿಯಮಾನುಸಾರ ಅನ್ವಯವಾಗುವ ರಾಯಲ್ಟಿ ತೆರಿಗೆಗಳನ್ನು ಕಟಾಯಿಸಲಾಗುವುದು. ಒಂದು ವೇಳೆ ಕೆಂಪುಮಣ್ಣು ಖರೀದಿಸಿದ ಸ್ಥಳದಲ್ಲಿ ರಾಯಲ್ಟಿ ಪಾವತಿ ಮಾಡಿದ್ದಲ್ಲಿ ಅದರ ದಾಖಲೆಗಳನ್ನು ಈ ಕಛೇರಿಗೆ ಒದಗಿಸಬೇಕು ಹಾಗೂ ಪ್ರತಿ ಘನ ಮೀಟರ್‌ಗೆ ದರವನ್ನು ಸೂಚಿಸಬೇಕು.

6 **ಹುಚ್ಚೆಳ್ಳು, ಹಿಂಡಿ, ಬೇವಿನ ಹಿಂಡಿ, ಮತ್ತು ಹೊಂಗೇ ಹಿಂಡಿಗಳನ್ನು** ಗುಣಮಟ್ಟದಲ್ಲಿ ಹಾಗೂ ಕೇಕ್ ಮಾದರಿಯಲ್ಲಿ ಹಿಂಡಿಗಳನ್ನು ಸರಬರಾಜು ಮಾಡಬೇಕು. ಪ್ರತಿ ಕೆ.ಜಿ.ಗೆ ದರವನ್ನು ಸೂಚಿಸಬೇಕು. ಅನ್ವಯವಾಗುವ ತೆರಿಗೆಗಳಿಗೆ ಬದ್ಧರಾಗಿರಬೇಕು.

7 **ಸಿಮೆಂಟ್ ಟಬ್ಸ್, ಸಿಮೆಂಟ್ ಕುಂಡಗಳು, ಬೋನ್ಸಾಯ್ ಪಾಟ್‌ಗಳು, ಮತ್ತು ಚೆನ್ನಾಗಿ ಬೆಂದಿರುವ ಮಣ್ಣಿನ ಕುಂಡಗಳು (ಅಳತೆ ಮತ್ತು ವಿವರಗಳನ್ನು ಟೆಂಡರ್ ಫಾರಂನಲ್ಲಿ ತಿಳಿಸಲಾಗುವುದು)** ನಿಖರವಾದ ಅಳತೆಯಲ್ಲಿನ ಕುಂಡಗಳನ್ನು ಮಾತ್ರ ಸರಬರಾಜು ಮಾಡಬೇಕು. ಕುಂಡಗಳನ್ನು ತಯಾರಿಸುವ ಸಂಸ್ಥೆಗಳವರು (POT MANUFACTURERS) ಮಾತ್ರ ಟೆಂಡರ್‌ಗಳನ್ನು ಸಲ್ಲಿಸಬೇಕು.

8 ರಬ್ಬರ್ ಪ್ಲಾಸ್ಟಿಕ್ ಹೋಸ್‌ಪೈಪ್ (1 ಇಂಚಿನ ಮತ್ತು 3/4``ಇಂಚಿನ ಹೋಸ್‌ಪೈಪ್‌ನ ಪ್ರತಿ ಮೀಟರ್‌ಗೆ ದರ ನಮೂದಿಸಬೇಕು.ಅಂಗೀಕೃತ ಸಂಸ್ಥೆಯ ಟ್ರೇಡ್ ಮಾರ್ಕ್‌ನ್ನು ಸಹ ನಮೂದಿಸಿರಬೇಕು. ವಿವಿಧ ಬಣ್ಣದ ವಿವಿಧ ಅಳತೆ ಪ್ಲಾಸ್ಟಿಕ್ ಕಂಟೈನರ್ಸ್, ಪ್ಲಾಸ್ಟಿಕ್‌ಹ್ಯಾಂಗಿಂಗ್ ಪಾಟ್ಸ್, ಪ್ಲಾಸ್ಟಿಕ್ ಬಾಣಲಿ, ಹೆಚ್.ಡಿ.ಪಿ.ಇ. Multching Sheet (ಪಾಲಿಥಿನ್ ಶೀಟ್), ಶೆಡ್ ನೆಟ್ 50% (ಅಳವಡಿಕೆ ಮತ್ತು ಕೂಲಿ ವೆಚ್ಚ ಸೇರಿ) ಸರಬರಾಜು ಮಾಡಲು ಟೆಂಡರ್ ಫಾರಂನಲ್ಲಿ ತಿಳಿಸಿದ ವಿವರಗಳ ರೀತಿ ಧರ ನಮೂದಿಸಬೇಕು.

9 ಅಂಬ್ರಲಾ ಮಾದರಿಯ ಸ್ಟ್ರಕ್ಚರ್ಸ್ /ಕ್ಲೈಂಬಿಂಗ್ ಸ್ಟ್ಯಾಂಡ್ (ವೃಕ್ಷ ಮಾದರಿ) ಹ್ಯಾಂಗಿಂಗ್ ಬಾಸ್ಕೆಟ್ ಸ್ಟ್ಯಾಂಡ್ ಸರಬರಾಜು ಮಾಡಲು (ವಿವರಗಳ (Specifiction)ನ್ನು ಟೆಂಡರ್ ಫಾರಂನಲ್ಲಿ ತಿಳಿಸಲಾಗುವುದು.)

10 ಅಕ್ವಾಟಿಕ್ ಗಿಡಗಳನ್ನು ಬೆಳೆಸಲು ಫೈಬರ್ ಟಬ್ಸ್ (Fiber Tubs) (ವಿವರಗಳ (Specifiction)ನ್ನು ಟೆಂಡರ್ ಫಾರಂನಲ್ಲಿ ತಿಳಿಸಲಾಗುವುದು.)

11 ಮೆಕ್ಸಿಕನ್ ಕಾರ್ಪಟ್‌ಹುಲ್ಲು ಪ್ರತಿ ಚದರ ಅಡಿಗೆ, ವಿವಿಧ ಅಲಂಕಾರಿಕ ಗಿಡಗಳು, ಫಿನಿಕ್ಸ್ ಪಾಮ್, ಫಾಕ್ಸ್ ಟೇಲ್ ಪಾಮ್, ಕುಬ್ಜ (Dwarf) ನಂದಿ ಬಟ್ಟಲು ಗಿಡ, (Toberomontena) (ವಿವರಗಳನ್ನು ಟೆಂಡರ್ ಫಾರಂನಲ್ಲಿ ತಿಳಿಸಲಾಗುವುದು.)

12 ನೀಲ್ ಕಮಲ್ Moulded ಪ್ಲಾಸ್ಟಿಕ್ ಕುರ್ಚಿ (Model) ಮಾದರಿ ಮತ್ತು ವಿವರಗಳನ್ನು ಟೆಂಡರ್ ಫಾರಂನಲ್ಲಿ ತಿಳಿಸಲಾಗುವುದು.

13 ಇತರೆ ಸಾಮಾಗ್ರಿಗಳಾದ ಬಿದಿರಿನ ಬುಟ್ಟಿ, ತೆಂಗಿನ ಪೊರಕೆ, ವಿವಿಧ ಏಷಯನ್ ಕಂಪನಿ ಬಣ್ಣ, ಪ್ರೈಂಮರ್, ರೆಡ್‌ಆಕ್ಸೈಡ್, ಪಿ.ವಿ.ಸಿ ಮಾಸ್‌ಸ್ಟಿಕ್ಸ್, ಮಾಸ್, ನೈಲನ್ ದಾರ, ಚಗರೇ (ತೆಂಗಿನ ನಾರು), ನೈಲಾನ್ ಬ್ಯಾಗ್, ಜೂಟ್‌ಬ್ಯಾಗ್, ಕೋರಾ ಬಟ್ಟೆ ,ಪೇಪರ್ ಬ್ಯಾಗ್, ವಿವಿಧ ಅಳತೆಯ ಪಾಲಿಥಿನ್‌ಬ್ಯಾಗ್, ಇತರೆ ಸಾಮಾಗ್ರಿಗಳಿಗೆ ಟೆಂಡರ್ ಫಾರಂನಲ್ಲಿ ತಿಳಿಸಿದ ವಿವರಗಳ ರೀತಿ ಧರ ನಮೂದಿಸಬೇಕು.

14 ವಿವಿಧ ವಿನ್ಯಾಸದಲ್ಲಿ ಗ್ರಾನೈಟ್ ಕಲ್ಲಿನಿಂದ ತಯಾರಿಸಿದ ಬೆಂಚುಗಳು, ಉದ್ಯಾನವನದಲ್ಲಿ ಅಳವಡಿಸುವಂತಹ ಗ್ರಾನೈಟ್ ಕಲ್ಲಿನ ಮಾಡೆಲ್‌ಗಳು/ ಗ್ರಾನೈಟ್ ಸ್ಟೋನ್ ಲೈಟ್ಸ್ / ಗ್ರಾನೈಟ್ ಸ್ಟೋನ್ ಫೌಂಟೇನ್/ಇತ್ಯಾದಿ ಸರಬರಾಜು ಮಾಡಲು ವಿವರಗಳ (Specifiction)ನ್ನು ಟೆಂಡರ್ ಫಾರಂನಲ್ಲಿ ತಿಳಿಸಲಾಗುವುದು.

15 ಪೆಬಲ್ಸ್ ವಿವಿಧ ಬಣ್ಣ, ವಿವಿಧ ಗಾತ್ರ (ಪ್ರತಿ ಕೆ.ಜಿ ಧರ)

16 ನಾಲ್ಕು ಚಕ್ರದ, ಮೂರು ಚಕ್ರದ, ಪ್ಲಾಟ್‌ಫಾರಂ ಮಾದರಿ ವೀಲ್‌ಬ್ಯಾರೊ, ಹಾಗೂ ತೋಟಗಾರಿಕಾ ಸಲಕರಣೆಗಳು, ವಿವರಗಳ (Specifiction)ನ್ನು ಟೆಂಡರ್ ಫಾರಂನಲ್ಲಿ ತಿಳಿಸಲಾಗುವುದು.

17 ಸಿಮೆಂಟ್ ಕುಂಡಗಳಲ್ಲಿ ಬೆಳೆದಿರುವ ಸೈಕಸ್ ಗಿಡಗಳು ಅಳತೆ, 2' X 24" (ಗಿಡಗಳ ಎತ್ತರ ಸೇರಿ) ಮತ್ತು ಕುಬ್ಜ ಜಾತಿ ಸೈಕಸ್ ಗಿಡಗಳು. ವಿವರಗಳನ್ನು ಟೆಂಡರ್ ಫಾರಂನಲ್ಲಿ ತಿಳಿಸಲಾಗುವುದು.

18 ಸೈನ್ ಬೋರ್ಡ್ ನಾಮಫಲಕಗಳು, ಮರದ ಹೆಸರು ಸೂಚಿಸುವ Name Plate ಗಳು, Flex ಬೋರ್ಡ್‌ಗಳು ವಿವರಗಳ (Specifiction)ನ್ನು ಟೆಂಡರ್ ಫಾರಂನಲ್ಲಿ ತಿಳಿಸಲಾಗುವುದು.

19 ಉದ್ಯಾನವನದ ವಿವಿಧ ವಿಭಾಗಗಳಲ್ಲಿ ಜೆ.ಸಿ.ಬಿ. ಯಂತ್ರದ ಮೂಲಕ ಕೆಲಸ ನಿರ್ವಹಿಸಲು ಬಾಡಿಗೆ ಧರ ಪ್ರತಿ ಗಂಟೆಗೆ ಧರ ನಮೂದಿಸಬೇಕು.

20 ಉದ್ಯಾನವನದ ವಿವಿಧ ವಿಭಾಗಗಳಲ್ಲಿ ಬೆಳೆದಿರುವ ಹುಲ್ಲು ಕಳೆ ಗಿಡಗಳನ್ನು ಟ್ರ್ಯಾಕ್ಟರ್ ಮೂಲಕ ಕತ್ತರಿಸಲು (Tracter Mounted Lawn Mover ) ಪ್ರತಿ ಎಕರೆಗೆ ಧರ ನಮೂದಿಸಬೇಕು.

21 ಗುತ್ತಿಗೆ ಆಧಾರದ ಮೇಲೆ ಉದ್ಯಾನವನಗಳ ನಿರ್ವಹಣೆ ಮಾಡಲು ಪ್ರತಿ ಮಾನವ ದಿನಕ್ಕೆ ತಗಲುವ ವೆಚ್ಚಕ್ಕೆ ಧರ ನಮೂದಿಸಬೇಕು.

22 ಮೇಲೆ ಸೂಚಿಸಿದ ಕ್ರ.ಸಂ.4,5,6,ರ ಸಾಮಾಗ್ರಿ **ಕೆಂಪುಮಣ್ಣು, ಮರಳು ಮತ್ತು ಹಿಂಡಿಗಳ ಸರಬರಾಜು ಮಾಡಲು ಟೆಂಡರ್ ಫಾರಂನ್ನು ಪಡೆದು** ರೂ.10,000/- ಗಳ ಮೌಲ್ಯದ ಬ್ಯಾಂಕ್ ಡ್ರಾಫ್ಟ್‌ನ್ನು ಠೇವಣಿಯಾಗಿ ಟೆಂಡರ್ ಫಾರಂ ಜೊತೆಯಲ್ಲಿ ಲಗತ್ತಿಸಿರಬೇಕು. ಗುತ್ತಿಗೆದಾರರು ಯಾವುದೇ ಷರತ್ತುಗಳನ್ನು ಟೆಂಡರ್‌ನಲ್ಲಿ ನಮೂದಿಸಿದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

23 ಮೇಲೆ ಸೂಚಿಸಿದ ಕ್ರ.ಸಂ. 2,3,ರ ಸಾಮಾಗ್ರಿ **ಕೊಟ್ಟಿಗೆ ಗೊಬ್ಬರ ಮತ್ತು ಕುದುರೆ ಗೊಬ್ಬರ ಸರಬರಾಜು ಮಾಡಲು ಟೆಂಡರ್ ಫಾರಂನ್ನು ಪಡೆದು** ರೂ.10,000/- ಗಳ ಮೌಲ್ಯದ ಬ್ಯಾಂಕ್ ಡ್ರಾಫ್ಟ್‌ನ್ನು ಠೇವಣಿಯಾಗಿ ಟೆಂಡರ್ ಫಾರಂ ಜೊತೆಯಲ್ಲಿ ಲಗತ್ತಿಸಿರಬೇಕು. ಗುತ್ತಿಗೆದಾರರು ಯಾವುದೇ ಷರತ್ತುಗಳನ್ನು ಟೆಂಡರ್‌ನಲ್ಲಿ ನಮೂದಿಸಿದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

24 ಮಣ್ಣಿನ ಕುಂಡಗಳು, ಸಿಮೆಂಟ್ ಕುಂಡಗಳು, ಇತ್ಯಾದಿ, ಕ್ರಮ ಸಂಖ್ಯೆ:7 ರ ಸಾಮಾಗ್ರಿಗಳನ್ನು ಸರಬರಾಜು ಮಾಡಲು ರೂ.10,000/– ಗಳ ಮೌಲ್ಯ ಬ್ಯಾಂಕ್ ಡ್ರಾಫ್ಟನ್ನು ಟೆಂಡರ್ ಫಾರಂ ಜೊತೆಯಲ್ಲಿ ಲಗತ್ತಿಸಬೇಕು. ಗುತ್ತಿಗೆದಾರರು ಯಾವುದೇ ಷರತ್ತುಗಳನ್ನು ಟೆಂಡರ್‌ನಲ್ಲಿ ನಮೂದಿಸಿದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

25 ಕ್ರಮ ಸಂಖ್ಯೆ: 8 ರಿಂದ 21 ರವರೆಗೆ ಸಾಮಾಗ್ರಿಗಳನ್ನು ಸರಬರಾಜು ಮಾಡಲು/ ಧರಗಳನ್ನು ನಮೂದಿಸಲು ಪ್ರತ್ಯೇಕವಾಗಿ ಟೆಂಡರ್ ಫಾರಂಗಳನ್ನು ಪಡೆದು ಪ್ರತಿ ಒಂದೊಂದಕ್ಕೆ ರೂ. 10,000/– ಗಳ ಮೌಲ್ಯ ಬ್ಯಾಂಕ್ ಡ್ರಾಫ್ಟನ್ನು ಟೆಂಡರ್ ಫಾರಂ ಜೊತೆಯಲ್ಲಿ ಲಗತ್ತಿಸಬೇಕು. ಗುತ್ತಿಗೆದಾರರು ಯಾವುದೇ ಷರತ್ತುಗಳನ್ನು ಟೆಂಡರ್‌ನಲ್ಲಿ ನಮೂದಿಸಿದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

26 ಯಶಸ್ವಿ ಟೆಂಡರ್‌ದಾರರು ನಮೂದಿಸಿರುವ ದರಗಳಲ್ಲೇ ಸರಬರಾಜು ಆದೇಶ ನೀಡಿದ 15 ದಿನಗಳ ಒಳಗೆ ಸರಬರಾಜು/ಕೆಲಸ ನಿರ್ವಹಣೆ ಮಾಡಬೇಕು. ತಪ್ಪಿದಲ್ಲಿ ಸರಬರಾಜು ಅದೇಶವನ್ನು ರದ್ದುಪಡಿಸಿ ಅಂತಹ ಗುತ್ತಿಗೆದಾರರ ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಕಾನೂನಿನಂತೆ ಕ್ರಮ ಜರುಗಿಸಲಾಗುವುದು. ಅನುದಾನದ ಲಭ್ಯತೆ ಹಾಗೂ ಅಗತ್ಯಕ್ಕೆ ಅನುಗುಣವಾಗಿ ಮಾತ್ರ ಸರಬರಾಜು /ಕೆಲಸದ ಅದೇಶ ನೀಡಲಾಗುವುದು.

27 ನಿರ್ದಿಷ್ಟ ಪ್ರಮಾಣದ ಪರಿಕರಗಳ ಸರಬರಾಜು ನಿರೀಕ್ಷೆಯನ್ನು ಗುತ್ತಿಗೆದಾರರು ಮಾಡುವಂತಿಲ್ಲ. ಸರಬರಾಜು ನೀಡಿದ ಪ್ರಮಾಣ ಉತ್ತಮ ಗುಣಮಟ್ಟದ ಕಾಯ್ದಿರಿಸಬೇಕು ಹಾಗೂ ಪದಾರ್ಥಗಳನ್ನು ಸರಬರಾಜು ಮಾಡಿ ಅಳತೆ ಕೊಟ್ಟ ನಂತರ ಮಾತ್ರ ಹಣ ಪಾವತಿಗೆ ಕ್ರಮ ಕೈಗೊಳ್ಳಲಾಗುವುದು.

28 ಈ ಕಛೇರಿಯಿಂದ ಆದೇಶ ನೀಡಿದ ದಿನಾಂಕದಿಂದ ಒಂದು ವಾರದೊಳಗೆ ತಿಳಿಸಿದ ವಿಭಾಗಗಳಿಗೆ ಸರಬರಾಜು ಮಾಡಬೇಕು. ಸಂಬಂಧಿಸಿದ ವಿಭಾಗಗಳ ಅಧಿಕಾರಿಗಳಿಂದ ದೃಢೀಕರಣ ಬಂದ ನಂತರವೇ ಬಿಲ್ಲುಗಳನ್ನು ಪಾವತಿಗೆ ಕ್ರಮಕೈಗೊಳ್ಳಲಾಗುವುದು. ಕ್ರಮ ಸಂಖ್ಯೆ:19,20,21, ರಲ್ಲಿನ ಕೆಲಸ ನಿರ್ವಹಣೆ ಅದೇಶ ನೀಡಿದ ದಿನಾಂಕದಿಂದ ಸಂಬಂಧಿಸಿದ ಪ್ರದೇಶದಲ್ಲಿ ಸಮರ್ಪಕವಾಗಿ ಕೆಲಸ ನಿರ್ವಹಣೆ ಮಾಡಿದ ನಂತರವೆ ಬಿಲ್ಲುಗಳನ್ನು ಪಾವತಿಗೆ ಕ್ರಮ ಕೈಗೊಳ್ಳಲಾಗುವುದು.

29 ನಿಯಮಾನುಸಾರ ಬಿಲ್ಲಿನ ಮೂಲದಲ್ಲಿ ಅನ್ವಯವಾಗುವ ತೆರಿಗೆಗಳನ್ನು ಕಟಾಯಿಸಲಾಗುವುದು, ಕಟಾಯಿಸಿದ ತೆರಿಗೆಗಳನ್ನು ಗುತ್ತಿಗೆದಾರರು ಇಚ್ಛಿಸಿದ್ದಲ್ಲಿ ಟಿ.ಡಿ.ಎಸ್. ನೀಡಲಾಗುವುದು.

30 ಟೆಂಡರ್‌ನಲ್ಲಿ ಭಾಗವಹಿಸಲು ಇಚ್ಛಿಸುವವರು ಟೆಂಡರ್ ಷರತ್ತು ಮತ್ತು ನಿಭಂದನೆಗಳಿಗೆ ಬದ್ಧರಾಗಿ ಟೆಂಡರ್ ಫಾರಂನ್ನು ಈ ಕಛೇರಿಯಿಂದ ನಿಗದಿಪಡಿಸಿದ ದಿನಾಂಕದಂದು ಪಡೆಯಬಹುದು.

ಹೆಚ್ಚಿನ ವಿಷಯಗಳಿಗೆ ಈ ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು.

ತೋಟಗಾರಿಕೆ ಉಪ ನಿರ್ದೇಶಕರು,

ಪಿ.ಆರ್. 289

ಕಬ್ಬನ್ ಉದ್ಯಾನವನ, ಬೆಂಗಳೂರು.